# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **184**

**ಮಾನ್ಯ ಸದಸ್ಯರ ಹೆಸರು** : **ಶ್ರೀ ಸಿ.ಎಂ. ಇಬ್ರಾಹಿಂ**

**ಉತ್ತರಿಸಬೇಕಾದ ದಿನಾಂಕ** : **01.02.2021**

**ಉತ್ತರಿಸಬೇಕಾದ ಸಚಿವರು** : **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಕೋವಿಡ್ – 19 ನಿಯಂತ್ರಣಕ್ಕೆ ಸಂಬಂಧಪಟ್ಟಂತೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಇದುವರೆಗೂ ಬಿಡುಗಡೆಯಾಗಿರುವ ಅನುದಾನ ಮತ್ತು ಬಳಕೆಯಾದ ಅನುದಾನ ಎಷ್ಟು ; | ಕೋವಿಡ್-19 ನಿಯಂತ್ರಣಕ್ಕೆ ಸಂಬಂಧಪಟ್ಟಂತೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ರಾಷ್ಟ್ರೀಯ ಆರೋಗ್ಯ ಅಭಿಯಾನಕ್ಕೆ ಇದುವರೆಗೆ ಬಿಡುಗಡೆಯಾಗಿರುವ ಅನುದಾನ ಮತ್ತು ಬಳಕೆಯಾದ ಅನುದಾನದ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ಕೋವಿಶೀಲ್ಡ್ (Covishield) ಕೋವ್ಯಾಕ್ಸಿನ್ (Covaxin) ಲಸಿಕೆಗಳ ತುರ್ತು ಬಳಕೆಗೆ ಅನುಮತಿ ನೀಡಲಾಗಿದ್ದು, ರಾಜ್ಯ ಯಾವ ವ್ಯಾಕ್ಸಿನ್ ಅನ್ನು ಯಾರ್ಯಾರಿಗೆ ನೀಡಲಾಗುತ್ತಿದೆ ಎಂಬ ಬಗ್ಗೆ ಮಾಹಿತಿ ಸಂಗ್ರಹಿಸಿ, ಲಸಿಕೆ ಪಡೆದವರಿಗೆ ಮಾಹಿತಿ ನೀಡಲಾಗುತ್ತಿದೆಯೇ; | ರಾಜ್ಯದ 6 ಆರೋಗ್ಯ ಸಂಸ್ಥೆಗಳಲ್ಲಿ (ಹಾಸನ ವೈದ್ಯಕೀಯ ಮಹಾವಿದ್ಯಾಲಯ, ಚಿಕ್ಕಮಗಳೂರು ಜಿಲ್ಲಾ ಆಸ್ಪತ್ರೆ, ದಾವಣಗೆರೆಯ ಚಿಗಟೇರಿ ಜಿಲ್ಲಾ ಆಸ್ಪತ್ರೆ, ಶಿವಮೊಗ್ಗದ ಮೆಗ್ಗಾನ್ ಆಸ್ಪತ್ರೆ, ಬಳ್ಳಾರಿಯ ವಿಮ್ಸ್ ಆಸ್ಪತ್ರೆ, ಚಾಮರಾಜನಗರ ವೈದ್ಯಕೀಯ ಮಹಾವಿದ್ಯಾಲಯ) ಕೋವ್ಯಾಕ್ಸಿನ್ ಲಸಿಕೆ ನೀಡಲಾಗುತ್ತಿದೆ. ಉಳಿದ ಎಲ್ಲಾ ಆರೋಗ್ಯ ಸಂಸ್ಥೆಗಳಲ್ಲಿ ಕೋವಿಶೀಲ್ಡ್ ಅನ್ನು ನೀಡಲಾಗುತ್ತಿದೆ. ಲಸಿಕೆ ನೀಡಿದ ನಂತರ ಯಾವ ಲಸಿಕೆಯನ್ನು ನೀಡಲಾಗಿದೆ ಎಂಬ ಮಾಹಿತಿಯನ್ನು ಫಲಾನುಭವಿಗಳಿಗೆ ನೀಡಲಾಗುತ್ತಿದೆ. |
| ಇ) | ಎರಡು ಕೋರ್ಸ್‌ಗಳಲ್ಲಿ ನೀಡಲಾಗುವ ಲಸಿಕೆಗಳಲ್ಲಿ ಮೊದಲು ಕೋವಿಶೀಲ್ಡ್ ಲಸಿಕೆಯನ್ನು ನೀಡಿದ ವ್ಯಕ್ತಿಗೆ 2ನೇ ಕೋರ್ಸ್‌ಗಳಲ್ಲಿ ಕ್ಯೋವ್ಯಾಕ್ಸಿನ್ ಲಸಿಕೆಯನ್ನು ನೀಡಲಾಗುತ್ತಿದೆಯೇ ; | ಎರಡು ಕೋರ್ಸ್‌ಗಳಲ್ಲಿ ನೀಡಲಾಗುವ ಲಸಿಕೆಗಳಲ್ಲಿ ಮೊದಲು ಕೋವಿಶೀಲ್ಡ್ ಲಸಿಕೆಯನ್ನು ನೀಡಿದ ವ್ಯಕ್ತಿಗೆ 2ನೇ ಕೋರ್ಸ್‌ನಲ್ಲಿ ಕೋವ್ಯಾಕ್ಸಿನ್ ಲಸಿಕೆಯನ್ನು ನೀಡಲಾಗುತ್ತಿಲ್ಲ. ಯಾವ ಲಸಿಕೆಯನ್ನು ಮೊದಲ ಡೋಸ್ ಆಗಿ ಪಡೆದಿರುತ್ತಾರೋ ಅದೇ ಲಸಿಕೆಯನ್ನು ಎರಡನೇ ಡೋಸ್ ಆಗಿ ನೀಡಲಾಗುತ್ತಿದೆ. |
| ಈ) | ಅನುಮತಿ ನೀಡಿದ ಲಸಿಕೆಗಳನ್ನು ಪಡೆದ ನಂತರ ಅಡ್ಡ ಪರಿಣಾಮಗಳು ಉಂಟಾಗಿರುವ ಪ್ರಕರಣಗಳೆಷ್ಟು; ಆ ರೀತಿ ಬಂದ ಪ್ರಕರಣಗಳಲ್ಲಿ ಸರ್ಕಾರವು ತಕ್ಷಣಕ್ಕೆ ತೆಗೆದುಕೊಳ್ಳುವ / ತೆಗೆದುಕೊಂಡಿರುವ ಕ್ರಮವೇನು? | ರಾಜ್ಯದಲ್ಲಿ ಲಸಿಕೆ ನೀಡಿದ ನಂತರ ಒಟ್ಟು 411 ಅಡ್ಡಪರಿಣಾಮಗಳ ಪ್ರಕರಣಗಳು ಉಂಟಾಗಿದ್ದು, ಅದರಲ್ಲಿ 402 ಸಣ್ಣ ಪುಟ್ಟ ಪ್ರಮಾಣದ ಪ್ರಕರಣಗಳಾಗಿವೆ ಉಳಿದ 9 ಪ್ರಕರಣಗಳಲ್ಲಿ ಆಸ್ಪತ್ರೆಗೆ ದಾಖಲಿಸಿ ಚಿಕಿತ್ಸೆ ನೀಡಲಾಗಿದೆ. ಅವುಗಳಲ್ಲಿ 7 ಪ್ರಕರಣಗಳಲ್ಲಿ ಗುಣಮುಖರಾಗಿದ್ದು, ಉಳಿದ 2 ಪ್ರಕರಣಗಳಲ್ಲಿ ಮರಣ ಸಂಭವಿಸಿದೆ. ಇದಕ್ಕೆ ಕೋವಿಡ್ ಲಸಿಕೆ ಕಾರಣವಾಗಿರುವುದಿಲ್ಲ. |

...2

| | | |
|---|---|---|
| | | 1. ರಾಜ್ಯ ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ತಜ್ಞರುಗಳನ್ನೊಳಗೊಂಡ ಎಇಎಫ್ಐ ಸಮಿತಿಗಳನ್ನು ರಚಿಸಲಾಗಿದೆ. ಈ ಸಮಿತಿ ಸದಸ್ಯರಿಗೆ ಕೋವಿಡ್ ಲಸಿಕಾಕರಣದಿಂದ ಉಂಟಾಗಬಹುದಾದ ಸಂಭಾವ್ಯ ಅಡ್ಡಪರಿಣಾಮಗಳ ಕುರಿತು ಅರಿವು ಮೂಡಿಸಲಾಗಿದೆ.<br>2. ಕೋವಿಡ್ ಲಸಿಕಾಕರಣದ ನಂತರ ಯಾವ ಲಸಿಕೆ ನೀಡಲಾಗಿದೆ, ಉಂಟಾಗಬಹುದಾದ ಸಂಭಾವ್ಯ ಸಣ್ಣ ಪುಟ್ಟ ಅಡ್ಡಪರಿಣಾಮಗಳು ಮತ್ತು ಅದರ ನಿವಾರಣ ಕ್ರಮಗಳ ಕುರಿತು ಮಾಹಿತಿ ನೀಡಲಾಗುತ್ತಿದೆ<br>3. ಲಸಿಕಾಕರಣದ ನಂತರ ಕಡ್ಡಾಯವಾಗಿ 30 ನಿಮಿಷಗಳ ಕಾಲ ಫಲಾನುಭವಿಗಳನ್ನು ಗಮನಿಸಲಾಗುತ್ತದೆ.<br>4. ಲಸಿಕಾಕರಣ ನಡೆಸಲಾಗುವ ಸ್ಥಳಗಳಲ್ಲಿ ಯಾವುದೇ ಅಡ್ಡಪರಿಣಾಮಗಳುಂಟಾದಲ್ಲಿ ತಕ್ಷಣವೆ ಚಿಕಿತ್ಸೆ ನೀಡಲು ಎಇಎಫ್ಐ (Adverse Event Following Immunization) ಕಿಟ್ ಮತ್ತು ಅನಾಫಲಾಕ್ಸಿಸ್ ಕಿಟ್‌ಗಳನ್ನು ಕಡ್ಡಾಯವಾಗಿ ಇರಿಸಲಾಗಿರುತ್ತದೆ ಮತ್ತು ಯಾವುದೇ ಅಡ್ಡಪರಿಣಾಮಗಳುಂಟಾದಲ್ಲಿ ತಕ್ಷಣವೇ ಅದನ್ನು ನಿರ್ವಹಿಸಲು ಎಲ್ಲಾ ಲಸಿಕೆ ನೀಡಿಕೆದಾರರಿಗೆ ತರಬೇತಿ ನೀಡಲಾಗಿದೆ ಹಾಗೂ ತಕ್ಷಣವೇ ಹೆಚ್ಚುವರಿ ಚಿಕಿತ್ಸೆ ನೀಡಲು ವ್ಯವಸ್ಥೆ ಮಾಡಲಾಗಿದೆ.<br>5. ಎಲ್ಲಾ ಸಣ್ಣ ಪುಟ್ಟ ಪ್ರಮಾಣದ ಪ್ರಕರಣಗಳನ್ನು ಸಮೀಪದ ಆರೋಗ್ಯ ಸಂಸ್ಥೆಗಳಲ್ಲಿ ನಿರ್ವಹಿಸಲಾಗುತ್ತಿದೆ ಹಾಗೂ ಈ ಮಾಹಿತಿಯನ್ನು ನಿಗದಿತ ನಮೂನೆಗಳಲ್ಲಿ ಜಿಲ್ಲೆಗಳಿಂದ ಪಡೆದು ಭಾರತ ಸರ್ಕಾರಕ್ಕೆ ವರದಿ ಮಾಡಲಾಗುತ್ತಿದೆ.<br>6. ಎಲ್ಲಾ ಗಂಭೀರ ಪ್ರಕರಣಗಳನ್ನು ಆಸ್ಪತ್ರೆಗಳಲ್ಲಿ ದಾಖಲಿಸಿ ಹೆಚ್ಚಿನ ಮಟ್ಟದ ಚಿಕಿತ್ಸೆ ನೀಡಲಾಗಿದೆ. ಇಂತಹ ಗಂಭೀರ ಪ್ರಕರಣಗಳನ್ನು ಎಇಎಫ್ಐ ರಿಪೋರ್ಟಿಂಗ್ ಪ್ರೋಟೋಕಾಲ್‌ನಂತೆ ವರದಿ ಮಾಡಲಾಗುತ್ತಿದೆ ಹಾಗೂ ದಾಖಲೆಗಳನ್ನು ಕೋವಿನ್ ಪೋರ್ಟಲ್ ಮತ್ತು ಇ-ಮೇಲ್ ಮೂಲಕ ಮಾಹಿತಿಯನ್ನು ರಾಷ್ಟ್ರ ಮಟ್ಟಕ್ಕೆ ಕಳುಹಿಸಲಾಗುತ್ತಿದೆ ಮತ್ತು ಜಿಲ್ಲಾ ಮಟ್ಟದಲ್ಲಿ ಈ ಪ್ರಕರಣಗಳನ್ನು ಜಿಲ್ಲಾ ಎಇಎಫ್ಐ ಸಮಿತಿ ಸಭೆಗಳಲ್ಲಿ ಚರ್ಚಿಸಿ ಕಾರ್ಯಕ್ರಮ ಸುಧಾರಣೆಗಾಗಿ ಶಿಫಾರಸು ಮಾಡಲಾಗುತ್ತಿದೆ. |

**ಸಂಖ್ಯೆ: ಆಕುಕ 08 ಎಸ್.ಟಿ.ಕ್ಯೂ 2021**

**(ಡಾ|| ಕೆ.ಸುಧಾಕರ್)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

| ಅನುಬಂಧ | | |
|---|---|---|
| ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ಕೋವಿಡ್-19 ನಿಯಂತ್ರಣಕ್ಕಾಗಿ ಬಿಡುಗಡೆಯಾದ ಅನುದಾನದ ವಿವರ | | |
| | | ರೂ.ಲಕ್ಷಗಳಲ್ಲಿ |
| ವಿವರ | | ಮೊತ್ತ |
| ಕೇಂದ್ರ ಸರ್ಕಾರದಿಂದ ಕೋವಿಡ್-19 ನಿಯಂತ್ರಣಕ್ಕಾಗಿ ಬಿಡುಗಡೆಯಾದ ಅನುದಾನ | | **37314.38** |
| ರಾಜ್ಯ ಸರ್ಕಾರದಿಂದ ಕೋವಿಡ್-19 ನಿಯಂತ್ರಣಕ್ಕಾಗಿ ಬಿಡುಗಡೆಯಾದ ಅನುದಾನ | | **3958.00** |
| ಒಟ್ಟು | | **41272.38** |
| | | |
| ಕೋವಿಡ್-19 ನಿಯಂತ್ರಣಕ್ಕಾಗಿ ಕಾರ್ಯಕ್ರಮ ಅನುಷ್ಠಾನ ಘಟಕಗಳಿಗೆ ಬಿಡುಗಡೆ/ವೆಚ್ಚ ಮಾಡಿದ ವಿವರ | | |
| ಕ್ರಮ ಸಂಖ್ಯೆ | ವಿವರ | ಮೊತ್ತ |
| 1 | ಮುಕ್ತ ನಿಧಿ ಅಡಿಯಲ್ಲಿ ಕೋವಿಡ್-19 ನಿಯಂತ್ರಣಕ್ಕಾಗಿ ಜಿಲ್ಲೆಗಳಿಗೆ ಬಿಡುಗಡೆ ಮಾಡಿದ ಮೊತ್ತ | 2400.00 |
| 2 | ವೈದ್ಯಕೀಯ ಶಿಕ್ಷಣ ಇಲಾಖೆಗೆ ಮತ್ತು ಬಿ.ಎಂ.ಸಿ.ಆರ್.ಐ ಬಿಡುಗಡೆ ಮಾಡಿದ ಮೊತ್ತ | 3400.00 |
| 3 | ಕೋವಿಡ್-19 ರಡಿ ಆಶಾ ಪ್ರೋತ್ಸಾಹ ಧನ ಜಿಲ್ಲೆಗಳಿಗೆ ಬಿಡುಗಡೆ ಮಾಡಿದ ಮೊತ್ತ | 4207.50 |
| 4 | ಕರ್ನಾಟಕ ಸ್ಟೇಟ್ ಡ್ರಗ್ಸ್ ಲಾಜಿಸ್ಟಿಕ್ಸ್ ಮತ್ತು ವೇರ್ ಹೌಸಿಂಗ್ ಸೊಸೈಟಿ (ನೊಂ)/ ಕರ್ನಾಟಕ ರಾಜ್ಯ ವೈದ್ಯಕೀಯ ಸರಬರಾಜು ನಿಗ್ವಮ ಲಿಮಿಟೆಡ್ ಬಿಡುಗಡೆ ಮಾಡಿದ ಮೊತ್ತ | 17326.76 |
| 5 | National Institute of Viralogy (ಎನ್.ಐ.ವಿ) ಗೆ ಕೋವಿಡ್-19 ಪರೀಕ್ಷೆಗೆ ಅಗತ್ಯ ಕಿಟ್ ಮತ್ತು Consumables ಖರೀದಿಗೆ ಬಿಡುಗಡೆ ಮಾಡಿದ ಮೊತ್ತ | 45.00 |
| 6 | ನಿಮ್ಹಾನ್ಸ್ ಗೆ ಕೋವಿಡ್-19 ಪರೀಕ್ಷೆಗೆ ಅಗತ್ಯ ಕಿಟ್ ಮತ್ತು Consumables ಖರೀದಿಗೆ ಬಿಡುಗಡೆ ಮಾಡಿದ ಮೊತ್ತ | 20.86 |
| 7 | ಕೋವಿಡ್-19 ಪರೀಕ್ಷೆಗೆ ಖಾಸಗಿ ಲ್ಯಾಬ್‌ಗಳಿಗೆ ರಾಜ್ಯ ಮಟ್ಟದಿಂದ ಪಾವತಿಸಿದ ಮೊತ್ತ | 544.18 |
| 8 | ಸಾರಿಗೆ ವೆಚ್ಚ, ಐ.ಇ.ಸಿ ಹಾಗೂ ಇತರೆ ವೆಚ್ಚಗಳಿಗೆ ರಾಜ್ಯ ಮಟ್ಟದಲ್ಲಿ ಪಾವತಿಸಿದ ಮೊತ್ತ | 113.53 |
| 9 | ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆಗೆ (ಎಸ್.ಐ.ಹೆಚ್.ಎಫ್.ಡಬ್ಲ್ಯು) ಪಾವತಿಸಿದ ಮೊತ್ತ | 100.00 |
| | ಒಟ್ಟು | **28157.83** |
| | ಅಂತಿಮ ಶಿಲ್ಕು | **13114.55** |

ಷರಾ:

* ರಾಷ್ಟ್ರೀಯ ಆರೋಗ್ಯ ಅಭಿಯಾನದಿಂದ ಕರ್ನಾಟಕ ಸ್ಟೇಟ್ ಡ್ರಗ್ಸ್ ಲಾಜಿಸ್ಟಿಕ್ಸ್ ಮತ್ತು ವೇರ್ ಹೌಸಿಂಗ್ ಸೊಸೈಟಿ (ನೊಂ) /ಕರ್ನಾಟಕ ರಾಜ್ಯ ವೈದ್ಯಕೀಯ ಸರಬರಾಜು ನಿಗಮ ಲಿಮಿಟೆಡ್ ಗೆ ರೂ. 2500.00 ಲಕ್ಷ ಬಿಡುಗಡೆ ಹಂತದಲ್ಲಿರುತ್ತದೆ.

** ರೂ. 12154.00 ಲಕ್ಷ ದಿನಾಂಕ : 08.01.2021 ಹಾಗೂ ರೂ. 1008.38 ಲಕ್ಷ ದಿನಾಂಕ: 11.01.2021 ರಂದು ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಬಿಡುಗಡೆಯಾಗಿದ್ದು, ರಾಜ್ಯ ಸರ್ಕಾರದಿಂದ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಘಕ್ಕೆ ಇನ್ನು ಬಿಡುಗಡೆಯಾಗಬೇಕಾಗಿರುತ್ತದೆ.